



# ಹೊಂಗನಸು




ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 82

ಸಂಪುಟ: ೧೦ ಸಂಚಿಕೆ: ೦೫ | ಆಗಸ್ಟ್ ೨೦೨೨ | ಪುಟಗಳು ೮ | ವಾರ್ಷಿಕ ಚಂದಾ ರೂ. ೨೦/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 10 Issue: 05 | August 2022 | Pages - 8 | A. Sub. - Rs. 20/- | Editor : Sri. B.R. Ravindranath


ಶ್ರೀ ಶಕ ೧೯೪೪ ಶುಭಕೃತ ನಾಮ ಸಂವತ್ಸರ ಉತ್ತರಾಯಣಾಯ– ದಕ್ಷಿಣಾಯಣ– ವರ್ಷ ಋತು ಚಾಂದ್ರಮಾನ –ಶ್ರಾವಣ –ಭಾದ್ರಪದ ಮಾಸ ಸೌರಮಾನ ಕಟಕ–ಸಿಂಹ



**ಚಂದಾ ವಿವರಗಳು**
ವಾರ್ಷಿಕ ಚಂದಾ : ರೂ. ೨೦/–
ಐದು ವರ್ಷಗಳ ಚಂದಾ : ರೂ. ೧೦೦/–


ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ಮೊಬೈಲ್ : ೯೭೨೮೧೨೧೨೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10–30ರಿಂದ ಸಂಜೆ 5–30ಗಂಟೆ.
ವಾರದ ರಜಾದಿನ : ಮಂಗಳವಾರ




## ಭಾರತದ ನೂತನ ರಾಷ್ಟ್ರಪತಿ ಶ್ರೀಮತಿ ದ್ರೌಪದಿ ಮುರ್ಮು ಅವರಿಗೆ ಅಭಿನಂದನೆಗಳು



೨೬.೦೬.೨೦೨೨

## ಡಾ. ಗೋವಿಂದ ಜಾಲಿಹಾಳ್ ದತ್ತಿ ಕಾರ್ಯಕ್ರಮ
## ೧೩ ರಿಂದ ೧೮ ವಯೋಮಾನದ ವಿದ್ಯಾರ್ಥಿಗಳಿಗಾಗಿ ಭಕ್ತಿಗೀತೆಗಳ ಗಾಯನ ಸ್ಪರ್ಧೆ



ಡಾ. ಎಸ್. ಅನಿಲ್‌ಕುಮಾರ್ ಸ್ವಾಗತ ಭಾಷಣದೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಸ್ಪರ್ಧೆಯಲ್ಲಿ ಭಾಗವಹಿಸಲು ಬಂದಿದ್ದ ವಿದ್ಯಾರ್ಥಿಗಳಿಗೆ, ಅವರ ಪೋಷಕರಿಗೆ, ತೀರ್ಪುಗಾರರಾಗಿ ಆಗಮಿಸಿದ್ದ ಶ್ರೀಮತಿ ಸಂಧ್ಯಾ ಶ್ರೀನಾಥ್ ಮತ್ತು ಶ್ರೀ ರಾಕೇಶ್ ಹಾಗೂ ಕಾರ್ಯಕ್ರಮದ ಅಧ್ಯಕ್ಷರಾದ ಡಾ. ಬೈರಮಂಗಲ ರಾಮೇಗೌಡ ಅವರಿಗೆ ಆತ್ಮೀಯವಾಗಿ ಸ್ವಾಗತ ಕೋರಿದರು. ದತ್ತಿದಾನಿ ಗೋವಿಂದರಾವ್ ಜಾಲಿಹಾಳ ಅವರ ಸುಪುತ್ರರಾದ ಶ್ರೀ ಮಿಲಿಂದ್ ಜಾಲಿಹಾಳ್ ಮತ್ತು ಸೊಸೆ ಶ್ರೀಮತಿ ಮಾನಸಿ ಜಾಲಿಹಾಳ್ ಅವರಿಗೆ ಸ್ವಾಗತ ಕೋರಿ, ಸಭೆಗೆ ಅವರ ಪರಿಚಯವನ್ನು ಮಾಡಿಕೊಟ್ಟರು. ಕಳೆದ ಎರಡು ವರ್ಷಗಳು ಕೋವಿಡ್ ಸಾಂಕ್ರಾಮಿಕ ರೋಗದ ಭಯದಿಂದ ಸ್ಪರ್ಧೆಗಳನ್ನು ನಡೆಸಲಾಗಲಿಲ್ಲ ಎಂದು ತಿಳಿಸಿ, ಸ್ಪರ್ಧೆಯಲ್ಲಿ ಭಾಗವಹಿಸುತ್ತಿರುವ ಸ್ಪರ್ಧಿಗಳಿಗೆ ಶುಭ ಕೋರಿದರು. – ೨ನೇ ಪುಟಕ್ಕೆ

## ಸಂಪಾದಕೀಯ

ನಮ್ಮ ದೇಶದ ದೀರ್ಘ ಇತಿಹಾಸದಲ್ಲಿ ಅಧಿಕಾರಕ್ಕಾಗಿ ರಾಜಮನೆತನದವರ ನಡುವೆಯೇ ಪಿತೃ ಹತ್ಯೆ, ಭ್ರಾತೃ ಹತ್ಯೆ ಮಾಡಿದವರನ್ನು, ಪುತ್ರ ವ್ಯಾಮೋಹಕ್ಕಾಗಿ ಯಾರನ್ನು ಬೇಕಾದರೂ ಬಲಿ ಕೊಡಲು ಸಿದ್ಧರಿದ್ದವರನ್ನು ನೋಡಿದ್ದೇವೆ. ಹಾಗೆಯೇ ಆನೆಯ ಸೊಂಡಿಲಿಗೆ ಹೂವಿನ ಹಾರ ಕೊಟ್ಟು ನಿಷ್ಪಕ್ಷಪಾತವಾಗಿ ರಾಜನನ್ನು ಆಯ್ಕೆ ಮಾಡುವ ಪದ್ದತಿಯೂ ಇತ್ತು ಎಂದು ಕೇಳಿದ್ದೇವೆ. ಇಂದು ಪ್ರಜಾಪ್ರಭುತ್ವವೆಂಬ ಕರಿಯು ಹಳ್ಳಿಯಿಂದ ಆದಿವಾಸಿ ಹೆಣ್ಣುಮಗಳನ್ನು ಗುರುತಿಸಿ ದಿಲ್ಲಿಗೆ ಕರೆದುಕೊಂಡು ಬಂದಿದೆ. ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯಡಿಯಲ್ಲಿ ಈ ರೀತಿಯ ಮುಕ್ತ ಅವಕಾಶಗಳಿರುವುದೇ ನಮಗೆ ಹೆಮ್ಮೆ ತರುವ ವಿಷಯವಾಗಿದೆ.

ಹಲವಾರು ಪ್ರಥಮಗಳನ್ನು ದಾಖಲಿಸಿ ಭಾರತದ ೧೫ನೇ ರಾಷ್ಟ್ರಪತಿಯಾಗಿ ಆಯ್ಕೆಗೊಂಡಿರುವ ಆದಿವಾಸಿ ಮಹಿಳೆ ಶ್ರೀಮತಿ ದ್ರೌಪದಿ ಮುರ್ಮು ಅವರಿಗೆ ಬಿ.ಎಂ.ಶ್ರೀ. ಪ್ರತಿಷ್ಠಾನ ಹಾಗೂ ಹೊಂಗನಸು ಬಳಗವು ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

– ಬಿ.ಆರ್. ರವೀಂದ್ರನಾಥ್

೧ನೇ ಪುಟದಿಂದ

ಡಾ. ಗೋವಿಂದರಾವ್ ಜಾಲಿಹಾಳ್ ಅವರು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸುತ್ತಲೇ, ಸಂಗೀತದಲ್ಲೂ ಅಭಿರುಚಿ ಬೆಳೆಸಿಕೊಂಡು, ಪ್ರತಿಷ್ಠಾನದಲ್ಲೂ ಒಂದು ಅವಧಿಯಲ್ಲಿ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದನ್ನು ನೆನಪಿಸಿಕೊಂಡ ಡಾ. ಬೈರಮಂಗಲ ರಾಮೇಗೌಡ ಅವರು, ಸಭೆಗೆ ಅವರ ಸಾಧನೆಗಳನ್ನು ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಟ್ಟರು. ಬಿ.ಎಂ.ಶ್ರೀ.ಪ್ರತಿಷ್ಠಾನವು ದತ್ತಿದಾನಿಗಳ ಆಶಯದಂತೆ ಪ್ರತಿವರ್ಷ ಆಯೋಜಿಸುತ್ತಿರುವ ಸಂಗೀತ ಸ್ಪರ್ಧೆಯಲ್ಲಿ ತಪ್ಪದೆ ಮುತುವರ್ಜಿಯಿಂದ ಭಾಗವಹಿಸುತ್ತಿರುವ ಶ್ರೀ ಮಿಲಿಂದ್ ಮತ್ತು ಶ್ರೀಮತಿ ಮಾನಸಿಯವರ ಬದ್ಧತೆಯನ್ನು ಮೆಚ್ಚಿಕೊಂಡರು. ವಿಜೇತರಾದ ಅಭ್ಯರ್ಥಿಗಳಿಗೆ ಪ್ರೋತ್ಸಾಹ ರೂಪವಾಗಿ ನಗದು ಬಹುಮಾನವನ್ನು ನೀಡುತ್ತಾ ಬರುತ್ತಿರುವ ವಿಷಯವನ್ನು ಸಭೆಗೆ ತಿಳಿಸಿದರು. ಸ್ಪರ್ಧಿಗಳ ಜೊತೆ–ಯಾಗಿ ಆಗಮಿಸಿದ ಪೋಷಕರೆಲ್ಲರೂ ಮಕ್ಕಳ ಬಗೆಗೆ ತೋರುತ್ತಿರುವ ಕಾಳಜಿಯನ್ನು ಮೆಚ್ಚಿಕೊಂಡು ವಿಶೇಷವಾಗಿ ಧನ್ಯವಾದವನ್ನು ಹೇಳಿದರು. ಸ್ಪರ್ಧೆಯು ತೀರ್ಪುಗಾರರ ಸಲಹೆ, ಕಿವಿಮಾತು ಮತ್ತು ನಿಯಮಗಳನ್ನು ತಿಳಿಸುವುದರ ಮೂಲಕ ಪ್ರಾರಂಭವಾಯಿತು.

**ವಿಜೇತರಾದವರ ವಿವರ :**

ಮೊದಲ ಬಹುಮಾನ– ರೂ. ೩೦೦೦ ಮತ್ತು ಫಲಕ–

**ಕು. ನಿಶಿತಾ ಪ್ರಸಾದ್**

ಎರಡನೇ ಬಹುಮಾನ– ರೂ. ೨೦೦೦ ಮತ್ತು ಫಲಕ –

**ಕು. ಹರ್ಷಿತಾ ಜಿ.ಆರ್.**

ಮೂರನೇ ಬಹುಮಾನ– ರೂ. ೧೦೦೦ ಮತ್ತು ಫಲಕ –

**ಕು. ಶಾಶ್ವತಿ ಬಾಲು**

ಸ್ಪರ್ಧೆಯಲ್ಲಿ ಭಾಗವಹಿಸಿದ ಸ್ಪರ್ಧಿಗಳೆಲ್ಲರಿಗೂ ಪ್ರಮಾಣಪತ್ರ ನೀಡಲಾಯಿತು. ಶ್ರೀ ಬಿ.ಎಸ್.ಗುರುಪ್ರಸಾದ್ ಅವರು ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಲು ಕಾರಣಕರ್ತರಾದವರೆಲ್ಲರಿಗೂ ವಂದನೆ ಸಲ್ಲಿಸಿದರು.

## ಜುಲೈ ೨೦೨೨

## ಹಸ್ತಪ್ರತಿ ವಿಭಾಗದ ವರದಿ

ಹಸ್ತಪ್ರತಿ ಸಂಗ್ರಹಾಲಯಕ್ಕೆ ೨೦ ತಾಡೆ ಓಲೆ ಗ್ರಂಥಗಳನ್ನು ಸಂರಕ್ಷಣೆಗಾಗಿ ಸ್ವೀಕರಿಸಲಾಗಿದೆ. ಅವುಗಳ ಸಂರಕ್ಷಣಾ ಕಾರ್ಯ ವಿವಿಧ ಹಂತಗಳಲ್ಲಿ ನಡೆಯುತ್ತಿದೆ. ಈ ಹಿಂದೆ ಮಾರ್ಚ್ ೨೦೨೨ರಲ್ಲಿ ಪ್ರತಿಷ್ಠಾನದ ಸಂಗ್ರಹಾಲಯಕ್ಕೆ ಶ್ರೀ ಅರೆಯರ್ ರಾಮಶರ್ಮ ಅವರು ನೀಡಿದ್ದ 'ಶಬ್ದಮಣಿ ದರ್ಪಣ' ಗ್ರಂಥದ ಸಂರಕ್ಷಣಾ ಕಾರ್ಯ ಪೂರ್ಣಗೊಂಡಿದ್ದು, ಸೂಚಿಯನ್ನು ಸಿದ್ಧಪಡಿಸಿದೆ.

## ಗ್ರಂಥಾಲಯದ ವಿಭಾಗದ ವರದಿ



ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಮಗೆ ಅಗತ್ಯವಿಲ್ಲದ ನಾಲ್ಕು ನೂರಕ್ಕೂ ಹೆಚ್ಚಿನ ಪುಸ್ತಕಗಳು ಕಳೆದ ನಾಲ್ಕು ವರ್ಷಗಳಿಂದೀಚೆಗೆ ಕಂಡುಬಂದಿದ್ದು, ಅವುಗಳನ್ನು ಸೂಕ್ತ ರೀತಿಯಲ್ಲಿ ವಿಲೇವಾರಿ ಮಾಡುವ ಸಲುವಾಗಿ 'ಪುಸ್ತಕ ಸಂತೆ'ಯನ್ನು ಪ್ರತಿಷ್ಠಾನದಲ್ಲಿ ದಿನಾಂಕ ೧೦–೭–೨೦೨೨ರಂದು ಆಯೋಜಿಸಲಾಗಿತ್ತು. ೪೫೭ ಪುಸ್ತಕಗಳನ್ನು ವಿಷಯವಾರು ವಿಂಗಡಿಸಿ, ವ್ಯವಸ್ಥಿತವಾಗಿ ಜೋಡಿಸಿ ಇಡಲಾಗಿತ್ತು. ವಿದ್ಯಾರ್ಥಿಗಳು, ಸಂಶೋಧನಾರ್ಥಿಗಳು, ಪುಸ್ತಕಪ್ರಿಯರು ಮತ್ತು ಸಾಹಿತ್ಯಾಸಕ್ತರು ಭಾಗವಹಿಸಿ ಪುಸ್ತಕ ಸಂತೆಯನ್ನು ಯಶಸ್ವಿಗೊಳಿಸಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ.ಬೈರಮಂಗಲ ರಾಮೇಗೌಡ ಹಾಗೂ ಗೌರವ ಕಾರ್ಯದರ್ಶಿಗಳಾದ ಡಾ. ಶಾಂತರಾಜು ಅವರು ಉಪಸ್ಥಿತರಿದ್ದು, ಪುಸ್ತಕ ಸಂತೆಯನ್ನು ಉದ್ಘಾಟಿಸಿದರು. ಪುಸ್ತಕ ಸಂತೆಯನ್ನು ವ್ಯವಸ್ಥಿತ ರೀತಿಯಲ್ಲಿ ಆಯೋಜಿಸಿದ್ದ ಗ್ರಂಥಪಾಲಕರಾದ ಶ್ರೀ ಬಿಎಸ್.ಗುರುಪ್ರಸಾದ್ ಅವರಿಗೆ ಎಲ್ಲಾ ರೀತಿಯಲ್ಲಿ ಸಹಕರಿಸಿದ ಶ್ರೀಮತಿ ವೀಣಾ, ಶ್ರೀಮತಿ ಪದ್ಮಾವತಿಬಾಯಿ, ಶ್ರೀಮತಿ ಗಾಯಿತ್ರಿ ಮತ್ತು ಶ್ರೀಮತಿ ವರಲಕ್ಷ್ಮಿ ಅವರನ್ನು ಅಭಿನಂದಿಸಲಾಯಿತು. ಈ ಪುಸ್ತಕ ಸಂತೆಯಲ್ಲಿ ೫೦ಕ್ಕೂ ಹೆಚ್ಚು ಆಸಕ್ತರು ಭಾಗವಹಿಸಿದ್ದರು.ಬಿ.ಎಂ.ಶ್ರೀ.

ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ಹಸ್ತಪ್ರತಿ ಸಂರಕ್ಷಣಾ



ತರಬೇತಿ ಪಡೆಯುತ್ತಿರುವ ಶ್ರೀ ಉಮೇಶ ಶಿರೂರು ಇವರು ತಮ್ಮ ತಂದೆ ಶಿರೂರು ಫಣಿಯಪ್ಪಯ್ಯ ಅವರ ೧೦೫ನೇ ಜನ್ಮದಿನದ ಸ್ಮರಣಾರ್ಥ ಅವರ ಕುಟುಂಬದಿಂದ ಪುಸ್ತಕದಾನವಾಗಿ ಕೆಳಕಂಡ ಪುಸ್ತಕಗಳನ್ನು ಪ್ರತಿಷ್ಠಾನದ ಗ್ರಂಥಾಲಯಕ್ಕೆ ನೀಡಿರುತ್ತಾರೆ.

# ಆಗಸ್ಟ್ ೨೦೨೨ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು



೧೭-೦೮-೨೦೨೨ ಬುಧವಾರ ಸಮಯ: ಸಂಜೆ ೫.೦೦

ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ

ಶ್ರೀಮತಿ ಬಿ.ಎಸ್. ರುಕ್ಮಿಣಮ್ಮ ಶ್ರೀ ಬಿ.ಎಸ್. ಸೀತಾರಾಮರಾವ್ ದತ್ತಿ ಕಾರ್ಯಕ್ರಮ

ವಿಷಯ : ಕನ್ನಡ ಸಾಹಿತ್ಯಕ್ಕೆ ಬೆಟಗೇರಿ ಕೃಷ್ಣಶರ್ಮ ಅವರ ಕೊಡುಗೆ

ಉಪನ್ಯಾಸಕರು : ಡಾ. ಪ್ರಮೀಳಾ ಮಾಧವ್

ಸಾಹಿತಿಗಳು ಹಾಗೂ ವಿಶ್ರಾಂತ ಪ್ರಾಧ್ಯಾಪಕರು, ಬೆಂಗಳೂರು



೨೬-೦೮-೨೦೨೨ ಶುಕ್ರವಾರ ಸಮಯ: ಸಂಜೆ ೫.೦೦

ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ

ಎ. ಸುಬ್ಬಯ್ಯ ಹೆಗಡೆ ಶಾಸ್ತ್ರಿ-ಯಂ.ಕೆ. ವಿಜಯಲಕ್ಷ್ಮಿ - ಎನ್. ಅನಂತರಂಗಾಚಾರ್

ಅನಂತರಂಗ ಪ್ರತಿಷ್ಠಾನ ದತ್ತಿ ಕಾರ್ಯಕ್ರಮ

ವಿಷಯ : ದಲಿತ, ಬಂಡಾಯ ಸಾಹಿತ್ಯ-ಹೊಸನೋಟ

ಉಪನ್ಯಾಸಕರು : ಡಾ. ಸುಬ್ರಮಣ್ಯಸ್ವಾಮಿ

ನಿರ್ದೇಶಕರು, ತೇಜಸ್ವಿ ಸಂಶೋಧನ ಕೇಂದ್ರ, ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ಕಾಲೇಜು, ಬೆಂಗಳೂರು

೧. The Selected writings of Rev. Ferdinand Kittel on Kannada Language, Literature and Culture, Published by Kannada University, Hampi, Price Rs. 800/-

೨. ಕೆಳದಿ ಬಸವರಾಜ ಸಂಕಲಿಸಿದ 'ಶ್ರೀ ಶಿವತತ್ತ್ವ ರತ್ನಾಕರ' ಸಂಸ್ಕೃತ ಭಾಷೆಯ ವಿಶ್ವಕೋಶ : ಐದು ಸಂಪುಟಗಳು- ಸಂಪಾದಕರು- ಪ್ರೊ. ಮಲ್ಲೇಪುರಂ ಜಿ ವೆಂಕಟೇಶ್.

ಪ್ರೊ. ತೀನಂಶ್ರೀ ಅವರ ಪುತ್ರ ಹಾಗೂ ಪ್ರಾರಂಭದ ದಿನಗಳಿಂದಲೂ ಬಿಎಂಶ್ರೀ ಪ್ರತಿಷ್ಠಾನದ ಸದಸ್ಯರಾಗಿರುವ ಮತ್ತು ಸುಮಾರು ೨೦ ವರ್ಷಗಳ ಕಾಲ ಬಿಎಂಶ್ರೀ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿರುವ ಪ್ರೊ. ಟಿ.ಎಸ್. ನಾಗಭೂಷಣ ಅವರು ತಮ್ಮ ಸಂಗ್ರಹದಲ್ಲಿದ್ದ ನಾಡಿನ ಖ್ಯಾತ ಸಾಹಿತಿಗಳ, ಕಾಲೇಜಿನ ಮತ್ತು ಕನ್ನಡ ಸಂಘ ಸಂಸ್ಥೆಗಳ ಅಮೂಲ್ಯವಾದ ೨೪ ಸಮೂಹ ಛಾಯಾಚಿತ್ರಗಳನ್ನು ಪ್ರತಿಷ್ಠಾನದ ಸಂಗ್ರಹಾಲಯಕ್ಕೆ ನೀಡಿರುತ್ತಾರೆ.

ಬಿಎಂಶ್ರೀ ಪ್ರತಿಷ್ಠಾನದ ಸ್ಥಾಪಕ ಸದಸ್ಯರಾದ ಹಾಗೂ ಸುಮಾರು ೨೦ ವರ್ಷಗಳ ಕಾಲ ಬಿಎಂಶ್ರೀ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿರುವ ಡಾ. ಕೆ.ಆರ್. ಗಣೇಶ್ ಅವರು, ತಮ್ಮ ಸಂಗ್ರಹದಲ್ಲಿದ್ದ ಅಮೂಲ್ಯವಾದ ಹಾಗೂ ಗ್ರಂಥಾಲಯಕ್ಕೆ ಅವಶ್ಯವಿದ್ದ ಇನ್ನಿತರ ಪುಸ್ತಕಗಳನ್ನು 'ಶಾಸ್ತ್ರದಾನ' ಮಾಡಿರುತ್ತಾರೆ. ಅವುಗಳನ್ನು ಪ್ರತಿಷ್ಠಾನವು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಿದೆ.

೧. South Indian inscription - ೧೭ ಸಂಪುಟಗಳು

೨. Epigraphia Indica/Indicies - ೧೯ ಸಂಪುಟಗಳು

೩. Kittel's Kannada-English Dictionary - ೪ ಸಂಪುಟಗಳು

೪. Annual Reports of Archaeology and Museums (Karnataka) -೨

ಶ್ರೀ ಮತ್ತಕೂರು ಎಸ್. ಕೃಷ್ಣ ಅವರು ಪ್ರತಿಷ್ಠಾನದ ಗ್ರಂಥಾಲಯಕ್ಕೆ ೯೯ ಅಮೂಲ್ಯವಾದ ಕೃತಿಗಳನ್ನು ಜುಲೈನಲ್ಲಿ ನೀಡಿರುತ್ತಾರೆ.

## ಪ್ರಕಟಣೆ

### ಶಾ. ಬಾಲುರಾವ್ ಯುವ ಬರಹಗಾರ ಪ್ರಶಸ್ತಿ ಮತ್ತು ಶಾ. ಬಾಲುರಾವ್ ಅನುವಾದ ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ.ಎಂ.ಶ್ರೀ. ಪ್ರತಿಷ್ಠಾನವು ಪ್ರತಿವರ್ಷ ನೀಡುವ ಇಪ್ಪತ್ತೈದು ಸಾವಿರ ರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ.ಬಾಲುರಾವ್ ಯುವಬರಹಗಾರ ಪ್ರಶಸ್ತಿಗಾಗಿ ೩೫ ವರ್ಷ ವಯಸ್ಸು ಮೀರದ ಯುವ ಬರಹಗಾರರು ರಚಿಸಿದ, ೨೦೨೧ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ ಸಾಹಿತ್ಯದ ಯಾವುದೇ ಪ್ರಕಾರದ ಕೃತಿಗಳನ್ನು ಆಹ್ವಾನಿಸುತ್ತಿದೆ.

ಹಾಗೆಯೇ -

ಬಿ.ಎಂ.ಶ್ರೀ. ಪ್ರತಿಷ್ಠಾನವು ಪ್ರತಿವರ್ಷ ನೀಡುವ ಇಪ್ಪತ್ತೈದು ಸಾವಿರ ರೂಪಾಯಿಗಳ ನಗದು ಹಾಗೂ ಸ್ಮರಣಿಕೆಯನ್ನು ಒಳಗೊಂಡಿರುವ ಶಾ.ಬಾಲುರಾವ್ ಅನುವಾದ ಪ್ರಶಸ್ತಿಗಾಗಿ ೨೦೨೧ರಲ್ಲಿ ಮೊದಲ ಮುದ್ರಣವಾಗಿ ಪ್ರಕಟವಾಗಿರುವ, ಬೇರಾವುದೇ ಭಾಷೆಯಿಂದ ಕನ್ನಡಕ್ಕೆ ಅನುವಾದವಾಗಿರುವ ಕೃತಿಗಳನ್ನು ಆಹ್ವಾನಿಸುತ್ತಿದೆ.

ಆಸಕ್ತ ಲೇಖಕರು ಅಥವಾ ಅವರ ಪರವಾಗಿ ಪ್ರಕಾಶಕರು, ಮಿತ್ರರು, ಪ್ರಕಟಗೊಂಡ ಕೃತಿಯ ಮೂರು ಪ್ರತಿಗಳನ್ನು ಲೇಖಕರ ವ್ಯಕ್ತಿ ವಿವರದ ಜೊತೆ ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ. ಪ್ರತಿಷ್ಠಾನ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦೦೧೯ ಇವರಿಗೆ ಕಳುಹಿಸಬಹುದು. ಕೊನೆಯ ದಿನಾಂಕ : ೨೦೨೨ ಆಗಸ್ಟ್ ೨೦ ಆಗಿರುತ್ತದೆ.

ಸಂಪರ್ಕಕ್ಕೆ : ೯೧೭೨೮೧೨೧೨೭

ಹಿಂದಿನ ಸಂಚಿಕೆಯಿಂದ

# ಬಿ.ಎಂ.ಶ್ರೀ. ಪ್ರತಿಷ್ಠಾನ ನಡೆದು ಬಂದ ದಾರಿ –೬

ಬಿ.ಆರ್. ರವೀಂದ್ರನಾಥ

## ಪ್ರತಿಷ್ಠಾನವನ್ನು ಕಟ್ಟಿ ಬೆಳೆಸಿದ ಮಹನೀಯರು



**ಪ್ರೊ. (ಡಾ) ಗೋವಿಂದರಾವ್ ಜಾಲೀಹಾಳ್**
**೨೨–೬–೧೯೩೬ – ೨೬–೦೭–೨೦೧೩**
**ಎಮ್.ಎ., ಪಿಯೆಚ್.ಡಿ., ಎಫ್.ಎ.ಜಿ.ಇ.,ಸಿ.ಒ.ಆರ್.**
**ತತ್ವಶಾಸ್ತ್ರದ ನಿವೃತ್ತ ಪ್ರೊಫೆಸರರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು**

ಡಾ. ಗೋವಿಂದರಾವ್ ಜಾಲೀಹಾಳ್ ಅವರು ೧೨–೦೮–೧೯೮೧ ರಿಂದ ೧೦–೧೦–೧೯೮೨ ರವರೆಗೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿರುತ್ತಾರೆ.

ಗದಗ, ವಿಜಾಪುರ, ಧಾರವಾಡ, ಮುಂಬಯಿ ಹಾಗೂ ಮೈಸೂರುಗಳಲ್ಲಿ ಶಿಕ್ಷಣ ಪಡೆದ ಜಾ.ಗೋ. ಮುಂಬಯಿ, ಉಲ್ಹಾಸನಗರ, ಮೂಲ್ಕಿ, ಶೃಂಗೇರಿ, ಪೆನ್ಸಕೋಲಾ (ಯು.ಎಸ್.ಎ) ಮೈಸೂರು, ಮದರಾಸು ಹಾಗೂ ಬೆಂಗಳೂರುಗಳಲ್ಲಿ ತರ್ಕಶಾಸ್ತ್ರ ಮತ್ತು ತತ್ವಶಾಸ್ತ್ರಗಳ ಅಧ್ಯಾಪಕರಾಗಿ ಕೆಲಸ ಮಾಡಿ ೧೯೯೬ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ತತ್ವಶಾಸ್ತ್ರದ ಪ್ರೊಫೆಸರ್ ಹುದ್ದೆಯಿಂದ ನಿವೃತ್ತರಾದರು. ತಮ್ಮ ಬಾಲ್ಯದಲ್ಲಿ ಭಾವಗೀತೆ ಮತ್ತು ಲಘುಶಾಸ್ತ್ರೀಯ ಸಂಗೀತಗಳ ಒಬ್ಬ ಬಹು–ಬಹುಮಾನ–ವಿಜೇತ ಗಾಯಕರಾಗಿದ್ದರು.

ಶ್ರೀ ಜಾ.ಗೋ ೧೯೬೮ರಲ್ಲಿ ಅಡಿಗರ 'ಸಾಕ್ಷಿ' ಪತ್ರಿಕೆಯಲ್ಲಿ ತಮ್ಮ ಪ್ರಪ್ರಥಮ ವಿಮರ್ಶೆಯ ಲೇಖನದಿಂದ ಕನ್ನಡ ಸಾಹಿತ್ಯಲೋಕವನ್ನು ಪ್ರವೇಶಿಸಿದರು. ಜಾ.ಗೋ. ಅವರ ಸಾಹಿತ್ಯ–ವಿಮರ್ಶೆಯ ಲೇಖನಗಳು ಮುಂದೆ ಸಾಕ್ಷಿ, ಸಂಕ್ರಮಣ, ಸಂಕೀರ್ಣ, ಪರಂಪರೆ, ಸಾಧನೆ, ಶೃಂಗಾರ, ಇಂಚರ ಮುಂತಾದ ಪತ್ರಿಕೆಗಳಲ್ಲಿಯೂ, ಸಹಸ್ಪಂದನ, ಕಾವ್ಯಶೋಧನ, ಆವಿಷ್ಕರಣ ಮುಂತಾದ ಸಂಕಲನ ಗ್ರಂಥಗಳಲ್ಲಿಯೂ ಮತ್ತು ಸಾಹಿತ್ಯಜೀವಿ, ಚೆಂಬೆಳಕು, ಹಣತೆ, ಪ್ರೊ. ವೃಷಭೇಂದ್ರಸ್ವಾಮಿ ಅಭಿನಂದನ ಗ್ರಂಥ ಮುಂತಾದ ಸಂಭಾವನಾ ಗ್ರಂಥಗಳಲ್ಲಿಯೂ ಪ್ರಕಟವಾದವು. ಜಾ.ಗೋ. 'ವಂಶವೃಕ್ಷ ಮತ್ತು ಸಂಸ್ಕಾರ – ಒಂದು ತುಲನಾತ್ಮಕ ವಿಮರ್ಶೆ ಹಾಗೂ 'ಕಾವ್ಯಮಂಥನ' ಎಂಬ ಎರಡು ವಿಮರ್ಶೆಯ ಗ್ರಂಥಗಳನ್ನೂ ಪ್ರಕಟಿಸಿದ್ದಾರೆ ಮತ್ತು 'ಬೇಂದ್ರೆ – ಸ್ಮೃತಿ' ಗ್ರಂಥವನ್ನು ದಿ॥ ಪ್ರೊ.ಎಂ.ವಿ.ಸೀತಾರಾಮಯ್ಯನವರೊಂದಿಗೆ ಸಂಪಾದಿಸಿ ಕೊಟ್ಟಿದ್ದಾರೆ.

೧೯೬೯–೭೦ ರಲ್ಲಿ ಅಮೇರಿಕೆಯ ಫ್ಲಾರಿಡಾದ ಪೆನ್ಸಕೋಲಾ ಕಾಲೇಜಿನಲ್ಲಿ ಒಂದು ವರುಷ ಕಾಲ ಪಾಶ್ಚಾತ್ಯ ತತ್ವಶಾಸ್ತ್ರದ ಸಂದರ್ಶಕ ಸಹಾಯಕ ಪ್ರಾಧ್ಯಾಪಕರಾಗಿ ಕೆಲಸ ಮಾಡಿ ಅಲ್ಲಿನ ತಮ್ಮ ಪಾಶ್ಚಾತ್ಯ ತತ್ವಶಾಸ್ತ್ರದ ಬೋಧನೆಗಾಗಿ ಆ ಕಾಲೇಜಿನಿಂದ ಪ್ರಶಸ್ತಿ–ಪತ್ರ (Certificate of Recognition) ಪಡೆದುಕೊಂಡು, ವಾಪಸು ಶೃಂಗೇರಿಯ ತಮ್ಮ ಜೆ.ಸಿ.ಬಿ.ಎಮ್. ಕಾಲೇಜಿಗೆ ಬಂದ ನಂತರ ಜಾ.ಗೋ. ೧೯೭೦ರಲ್ಲಿ ಕನ್ನಡದಲ್ಲಿ ಕಾವ್ಯರಚನೆಯನ್ನು ಪ್ರಾರಂಭಿಸಿದರು. ಜಾ.ಗೋ. ತಮ್ಮ ಅದಮ್ಯ–ಸಂಗೀತ ಪ್ರೀತಿಯ ಫಲವಾಗಿ ನವ್ಯ ಮತ್ತು ನವೋದಯ ಕವಿತೆಗಳ ಜೊತೆಗೆ 'ಗೇಯ ಕವಿತೆ'ಗಳನ್ನೂ ರಚಿಸತೊಡಗಿದರು.

ಭಾರತೀಯ ಶಾಸ್ತ್ರೀಯ ಸಂಗೀತದಲ್ಲಿ ತಮಗಿರುವ ಆಳವೂ ವಿಸ್ತಾರವೂ ಆದ ಆಸಕ್ತಿ, ಶ್ರವಣಾನುಭವ, ವ್ಯಾಸಂಗ ಹಾಗೂ ಕಾವ್ಯರಚನಾ ಸಾಮರ್ಥ್ಯ ಇವೆಲ್ಲವುಗಳ ಫಲಿತವಾಗಿ ಜಾ.ಗೋ. ಅವರು ಅನೇಕ ಭಾರತೀಯ ಶಾಸ್ತ್ರೀಯ ಸಂಗೀತಗಾರರು (ಕರ್ನಾಟಕ ಮತ್ತು ಹಿಂದುಸ್ತಾನಿ ಈ ಎರಡೂ ಸಂಪ್ರದಾಯಗಳ) ಗಳನ್ನು ಹಾಗೂ ಅವರುಗಳ ಸಂಗೀತ–ಶೈಲಿಗಳನ್ನು ಕುರಿತು ಗೇಯವಲ್ಲದ, ಗದ್ಯದ ನಡೆಯ ಕವಿತೆಗಳನ್ನು ರಚಿಸಿದ್ದು ಅವುಗಳ ಪೈಕಿ ೧೭ ಸಂಗೀತಗಾರರುಗಳನ್ನು ಕುರಿತು ೧೬ ಕವಿತೆಗಳನ್ನು ರಚಿಸಿದ್ದಾರೆ. ಈ ಕವಿತೆಗಳ ಪೈಕಿ ಅವರವರುಗಳನ್ನು ಕುರಿತು ಕವಿತೆಗಳನ್ನು ದಿ॥ ಭಾರತರತ್ನ ಎಂ.ಎಸ್.ಸುಬ್ಬುಲಕ್ಷ್ಮೀ, ಜಯಪುರ–ಅತ್ರೌಲಿ ಘರಾಣೆಯ ದಿ॥ ಪಂಡಿತ ಮಲ್ಲಿಕಾರ್ಜುನ ಮನಸೂರ (ಮನಸೂರರಿಗೆ ಅವರನ್ನು ಕುರಿತ ಕವಿತೆಯನ್ನು ಅವರ ಜೀವಿತದ ಕಾಲದಲ್ಲೇ ಕಳಿಸಲಾಗಿತ್ತು. ಆಗಲೇ ಅವರು ಅದನ್ನು ಓದಿಸಿ, ಕೇಳಿ ಮೆಚ್ಚುಗೆ ವ್ಯಕ್ತಪಡಿಸಿದ್ದರು) ಹಾಗೂ ಕಿರಾನಾ ಘರಾಣೆಯ ಪಂಡಿತಾ ಗಂಗೂಬಾಯಿ ಹಾನಗಲ್ ಮತ್ತು ಪಂಡಿತ ಭೀಮಸೇನಜೋಶಿ ಇವರುಗಳು ಮೆಚ್ಚಿಕೊಂಡಿದ್ದಾರೆ. ಆಗ್ರಾ ಘರಾಣೆಯ ದಿವಂಗತ ಉಸ್ತಾದ್ ಫೈಯ್ಯಾಜ್‌ಖಾನ್‌ರನ್ನು ಕುರಿತ ಕವಿತೆಯನ್ನು ಉಸ್ತಾದರ ಪ್ರಪ್ರಶಿಷ್ಯರಾದ ಮುಂಬಯಿಯ ಕಲ್ವಾ–ಠಾಣೆಯ ಪಂ.ಜಿ.ಜಿ.ಜೋಶಿ ಇವರು ಮೆಚ್ಚಿಕೊಂಡಿದ್ದಾರೆ. ದಿ॥ ಡಾ॥ ಮಲ್ಲಿಕಾರ್ಜುನ ಮನಸೂರ ಹಾಗೂ ಡಾ॥ ಗಂಗೂಬಾಯಿ ಹಾನಗಲ್ ಇವರುಗಳನ್ನು ಕುರಿತ ಕವಿತೆಗನ್ನು ಅನುಕ್ರಮವಾಗಿ ಡಾ॥ ಮನಸೂರರ ಪ್ರಮುಖ ಹಾಗೂ ಪ್ರಸಿದ್ಧ ಅಭಿಮಾನಿಗಳಲ್ಲೊಬ್ಬರಾದ ಕವಿ ಡಾ॥ ಚೆನ್ನವೀರ ಕಣವಿ ಹಾಗೂ ಡಾ॥ ಗಂಗೂಬಾಯಿಯವರ ಪ್ರಮುಖ ಹಾಗೂ ಪ್ರಸಿದ್ಧ ಅಭಿಮಾನಿಗಳಲ್ಲೊಬ್ಬರಾದ ಕಾದಂಬರಿಕಾರ ಡಾ॥ ಎಸ್.ಎಲ್.ಭೈರಪ್ಪ ಇವರುಗಳು ಕೂಡ ಮೆಚ್ಚಿಕೊಂಡಿದ್ದಾರೆ.

ಶ್ರೀ ಜಾ.ಗೋ. ಅವರ ಹೆಸರು ಮತ್ತು ಪರಿಚಯ 'Directory of American Philosophers, Vol. V., 1970-71', 'Marquis's who's who in the world' ಮತ್ತು 'Who's Who in Asia', ಇಂಡಿಯನ್ ಕೌನ್ಸಿಲ್ ಆಫ್ ಫಿಲಾಸಫಿಕಲ್ ರಿಸರ್ಚ್‌ನ 'Who's Who of Indian Philosophers'', ಕೇಂದ್ರ ಸಾಹಿತ್ಯ ಅಕಾಡೆಮಿಯ 'Who's Who of Indian Writers' ಹಾಗೂ ಕನ್ನಡದ 'ಸಾಹಿತಿ ಮಾಹಿತಿ ಕೋಶ, ಭಾಗ–೨' ಈ ಎಲ್ಲಾ ಮಾಹಿತಿ–ಗ್ರಂಥಗಳಲ್ಲಿ ದಾಖಲಾಗಿವೆ.

ಡಾ. ಗೋವಿಂದ್ ಜಾಲಿ ಹಾಳ್ ಅವರ ಹೆಸರಿನಲ್ಲಿ ಅವರ ಮಗ ಶ್ರೀ ಮಿಲಿಂದ್ ಜಾಲಿಹಾಳ್ ಅವರು ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ದತ್ತಿಯನ್ನು ಸ್ಥಾಪಿಸಿರುತ್ತಾರೆ.

ಮುಂದುವರೆಯುವುದು



# ಎಂ.ವಿ.ಸೀ.
# ಬದುಕು ಬರಹ – ೨೯

ಹಿಂದಿನ ಸಂಚಿಕೆಯಿಂದ

## ಪ್ರಬಂಧಗಳು ಹಾಗೂ ವ್ಯಕ್ತಿಚಿತ್ರಗಳು

ಹೊಸಗನ್ನಡದಲ್ಲಿ ಪ್ರಬಂಧವು ವಿಪುಲವಾಗಿಯೂ ವೈವಿಧ್ಯಪೂರ್ಣವಾಗಿಯೂ ಬೆಳೆದಿರುವ ಸಾಹಿತ್ಯ ಪ್ರಕಾರವಾಗಿದೆ. ಎ.ಎನ್. ಮೂರ್ತಿರಾವ್, ಪುತಿನ, ಗೊರೂರು, ದ.ಬಾ. ಕುಲಕರ್ಣಿ, ರಾಕು, ತೀನಂಶ್ರೀ ಮುಂತಾದವರು ಈ ಪ್ರಕಾರವನ್ನು ಸಮೃದ್ಧಗೊಳಿಸಿದ್ದಾರೆ. ಎಂವಿಸೀ ಅವರದೂ ಈ ಪ್ರಕಾರ–ಕ್ಕೆ ಸಂದಿರುವ ಸೇವೆ ಅಲ್ಪವೇನಲ್ಲ. 'ಮುಗಿಲುಗಳು' ಎಂಬ ಅವರ ಭಾವಪ್ರಬಂಧಗಳ ಸಂಕಲನವು ೧೯೫೦ ರಲ್ಲಿ ಪ್ರಕಟವಾಯಿತು; ದೀರ್ಘ ಕಾಲದಲ್ಲಿ ಆಗಾಗ್ಗೆ ಬರೆದ ಬರಹಗಳು ಅವು. ಮುಂದೆ ಅದಕ್ಕೆ ಮತ್ತೊಂದು ಪ್ರಬಂಧ ಸೇರ್ಪಡೆಗೊಂಡಿತು. ಹೀಗೆ ಅವರ ಭಾವಪ್ರಬಂಧಗಳೆನ್ನಿಸಿಕೊಳ್ಳಬಲ್ಲ ಲೇಖನಗಳು ಹತ್ತು. ಎಂವಿಸೀ ಅವರೇ ಒಪ್ಪಿಕೊಳ್ಳುವಂತೆ ಅವರ ನಿಸರ್ಗಾನಿಭವ ಸೀಮಿತವಾದದ್ದು: "ನಾನು ಮಲೆನಾಡಿನ ಮಗುವಲ್ಲ; ಮೈಸೂರಿನಲ್ಲಿ ಹುಟ್ಟಿ ಬೆಳೆದವನು .. .. ನೀಲಾಕಾಶ .. .. ಚಾಮುಂಡಿಬೆಟ್ಟದ ಮೇಲ್ಭಾಗ; ಅದರ ಮೇಲೆ ಹಾದು ಹೋಗುತ್ತಿದ್ದ ಮೋಡದ ದಿಬ್ಬಣ .. .. ಸಂಜೆಗೆಂಪಿನ ಸಿರಿವಂತಿಕೆ .. .. ಸಿಂಧೂರವರ್ಣದ ದಾಳಿಂಬೆ ಹೂ .. .. ಹೆಸರರಿಯದ ಹಾಡುಹಕ್ಕಿಗಳು – ಇಷ್ಟೇ ನನ್ನ ಸಂಕುಚಿತ ನಿಸರ್ಗ ಪ್ರಪಂಚ. ಈ ಸೀಮಿತ ಜಗತ್ತಿನಲ್ಲಿ ಅವರ ಕಲ್ಪನೆ ಗರಿಗೆದರುವ ಹಾಗೆ ಮಾಡುತ್ತಿದ್ದುದು ಮೋಡಗಳು; ತಮ್ಮನ್ನವರು "ಮೇಘಲೋಕ ನಿರತ" ಎಂದೇ ಬಣ್ಣಿಸಿಕೊಳ್ಳುತ್ತಾರೆ. ಅವರ ಪ್ರಬಂಧಗಳಲ್ಲೆಲ್ಲ 'ಮುಗಿಲುಗಳು' ಎಂಬುದು ತುಂಬ ಹೆಸರುವಾಸಿಯಾದುದು. ಆಗಸದಲ್ಲಿ ತೇಲುವ ಮುಗಿಲುಗಳು ಎಲ್ಲ ಕಾಲದ ಜನರನ್ನು ಹಿಡಿದಿಡುವ ಸಾಮರ್ಥ್ಯವುಳ್ಳವು. ಕಾಳಿದಾಸನ 'ಮೇಘದೂತ' ಪ್ರಸಿದ್ಧವಾದುದು. ಮೋಡಗಳು ಎಲ್ಲಿಂದ ಬಂದುವು? ಎಲ್ಲಿಗೆ ಹೋಗುತ್ತವೆ? ಎಂಬ ಕುತೂಹಲದಿಂದ ಆರಂಭಗೊಳ್ಳುವ ಭಾವಲಹರಿ ವಿವಿಧ ಸ್ವರೂಪಗಳನ್ನು ತಾಳುವ ಮುಗಿಲಗಳನ್ನು ಕುರಿತು ಈ ಪ್ರಬಂಧವು ಕಲ್ಪನಾಲಹರಿಯನ್ನು ಹರಿಸುತ್ತದೆ. ತನ್ನ ಆಂತರಂಗಿಕ ಭಾವನೆಗಳಿಗೆ ಇವು ಸಹಾನುಭೂತಿಯನ್ನು ತೋರಿಸುವಂತೆ ಕಾಣುತ್ತದೆ. ಹೀಗಾಗಿ "ಎಷ್ಟೋ ಮಾನವರಿಗಿಂತ ಮೇಲು ಈ ಮುಗಿಲುಗಳು" ಅನ್ನಿಸುತ್ತದೆ. ಕತ್ತೆತ್ತಿ ಮೇಲೆ ನೋಡುತ್ತ ಮುಗಿಲಿನಂತೆ ದಿವ್ಯತೆಯ ಸಹಾನುಭೂತಿಯನ್ನು ಪಡೆದು ಜೀವಿಸುವ ಶಕ್ತಿಯನ್ನು ಪಡೆಯಬೇಕೆಂಬ ಮೆಲ್ಮುಖತೆಯ ಆಕಾಂಕ್ಷೆಯನ್ನು ವ್ಯಕ್ತಪಡಿಸುವ ಈ ಪ್ರಬಂಧ ಬಹು ಜನಪ್ರಿಯವಾಗಿದೆ. ಅಂತೆ–ಯೇ 'ಧೂಮಲೀಲೆ' ಎಂಬುದು ಮತ್ತೊಂದು ಯಶಸ್ವೀ ಪ್ರಬಂಧ. ಹೊಗೆಯ ವಿವಿಧ ಬಗೆಗಳ, ಆಕಾರಗಳ ವರ್ಣನೆ ಮನಸೆಳೆಯುತ್ತದೆ. ಅದರ ವಿಧ್ವಂಸಕ ಚೈತನ್ಯ ಲೇಖಕರಿಗೆ ಒಮ್ಮೆ "ಧೂಮಸ್ತೋಮ ಪಾತಾಳದಿಂದ ಮುನಿದೆದ್ದ ಸಾವಿರ ಹೆಡೆಯ ಆದಿಶೇಷ"ನಂತೆ ಕಂಡ–ರೆ, ಮತ್ತೊಮ್ಮೆ "ಸಂತಪ್ತ ದುಃಖಾಗ್ನಿಯ ಕರ್ಬೊಗೆ"ಯೆನಿಸುತ್ತದೆ; ಮಗುದೊಮ್ಮೆ "ಅಗ್ನಿದೇವನ ಉನ್ಮತ್ತ ನೃತ್ಯ"ದಂತೆ ಗೋಚರಿಸುತ್ತದೆ. ಆದರೆ ಊದುಬತ್ತಿಯ ಹೊಗೆ ನೆನಪಾದಾಗ ಅದು "ಪರಿಮಳಿತ ಧೂಮಲತೆ"ಯಂತೆ ಗೋಚರಿಸುತ್ತದೆ. ಊದಿನಕಡ್ಡಿ "ಧೂಮಜೀವಿ"ಯೆನಿಸುತ್ತದೆ. ಮುಂದೆ ದೈವಲೀಲೆ ಧೂಮಲೀಲೆಗಳು ಒಂದೇ ಎಂಬ ಅರಿವಾದಂತಾಗುತ್ತದೆ. (ಈ ಹೆಸರಿನ ಪ್ರಸಿದ್ಧ ಕವನವೊಂದು ಆನಂತರ ಗೋಪಾಲಕೃಷ್ಣ ಅಡಿಗ–ರಿಂದ ರಚಿತವಾಯಿತು. "ಈ ಕವನವನ್ನು ಮೊದಲೇ ಓದಿದ್ದರೆ ಈ ಪ್ರಬಂಧವನ್ನು ಬರೆಯುತ್ತಲೇ ಇರಲಿಲ್ಲವೇನೋ" ಎಂದು ಲೇಖಕರೇ ಮುಂದೆ ಹೇಳಿಕೊಳ್ಳುತ್ತಾರೆ). 'ತುಂಬೆಯ ಹೂ' ಕೂಡ ನವಿರು ಭಾವನೆಗಳಿಂದ ಕೂಡಿದ ಪ್ರಬಂಧ; ತುಂಬೆ ಹೂವಿನ ವಿನಮ್ರತೆ ಕವಿಗೆ ಮೆಚ್ಚಿಕೆ. ಅದು ನಮ್ಮ ಆದರ್ಶವಾಗಬೇಕೆಂಬ ಹಂಬಲ ಲೇಖಕರದು. 'ಬಾಡಿಗೆ ಮನೆಗಳು' ನವಿರು ಹಾಸ್ಯದಿಂದ ಕೂಡಿದ ಒಂದು ಲಲಿತ ಪ್ರಬಂಧ. 'ಸಂಗೀತ ಸಭೆಯ ಸ್ವಾರಸ್ಯ' ವಿನೋದಪರವಾದರೂ ವಿಷಾದದ ನೆರಳಿನಲ್ಲಿಯೇ ಸಾಗುತ್ತದೆ. ಅಂತೆಯೇ 'ನಾನು ಈಜು ಕಲಿತದ್ದು' ಎಂಬ ಪ್ರಬಂಧದಲ್ಲಿ ಈಜು ಕಲಿಯಬೇಕೆಂಬ ಆಸೆಗೆ ಯಾವುದೋ ಅಡ್ಡಿ ಬಂದಾಗ ಆ ಆಸೆ ಹೇಗೆ ಕನಸಿನಲ್ಲಿ ಫಲವನ್ನು ಅಪೇಕ್ಷಿಸಿತು ಎಂಬುದರ ಚಿತ್ರ ಇದರಲ್ಲಿದೆ. 'ರಸಿಕತೆ' ಒಂದು ರೀತಿಯಲ್ಲಿ ರಾಳ್ಲಪಲ್ಲಿ ಅನಂತಕೃಷ್ಣ ಶರ್ಮರ 'ರಾಯರ ಕಾಲದ ರಸಿಕತೆ' ಎಂಬ ಲೇಖನದ ಮಾತುಗಳ ಸೋದಾಹರಣ ವಿವರಣೆ ಎನ್ನಿಸುತ್ತದೆ. ರಸಿಕತೆಯ ವಿವಿಧ ಬಗೆಗಳು, ಕಾಲಕಾಲಕ್ಕೆ ಬದಲಾಗುವ ಅದರ ಸ್ವರೂಪ, ಕೊನೆಗೆ 'ಹೊರಗಿನ ಥಾಳಥಳ್ಯವನ್ನು ಬಿಟ್ಟು ಒಳಗಿನ ಸಾಮರಸ್ಯಕ್ಕೆ ಪ್ರಯತ್ನಿಸುವ ಬಯಕೆ' ಎಂಬ ವ್ಯಾಖ್ಯಾನ– ಈ ಕಾರಣದಿಂದ ಈ ಬರಹ ಮನಸೆಳೆಯುತ್ತದೆ. ಈ ಸಂಕಲನದಲ್ಲಿರುವ 'ಡೊಂಬರು' ಎಂಬುದು ವಿಲಿಯಂ ಹ್ಯಾಸ್‌ಲಿಟ್‌ನ 'ದ ಇಂಡಿಯನ್ ಜಗ್ಲರ್ಸ್' ಪ್ರಬಂಧದ ಪ್ರೇರಣೆಯನ್ನು ಹೊಂದಿದೆ. ಡೊಂಬರಾಟ ಕೈಚಳಕದ ಪ್ರದರ್ಶನವಾದರೂ ಅದು ಮಹತ್ವದತ್ತ ಸಾಗಿ ದೊಡ್ಡದನ್ನು ಸಾಧಿಸುವ ಬಯಕೆಯ ಪ್ರತೀಕವಾಗಿ ಹೊರಹೊಮ್ಮುತ್ತದೆ. ಹೀಗೆ ಈ ಪ್ರಬಂಧ ಸಂಕಲನದಲ್ಲಿ ಶಾಂತ, ಗಂಭೀರ, ಹಾಸ್ಯ ಎಲ್ಲ ಭಾವಗಳೂ ಗೋಚರವಾಗುತ್ತವೆ. ಪ್ರೊ|| ಜಿ. ವೆಂಕಟಸುಬ್ಬಯ್ಯನವರು ಎಂವಿಸೀ ಅವರ ಪ್ರಬಂಧಗಳ ಕುರಿತು ಹೀಗೆ ಹೇಳುತ್ತಾರೆ: "ಉತ್ಪ್ರೇಕ್ಷೆ ಇವರ ಮೆಚ್ಚಿನ ಅಲಂಕಾರ. ಪ್ರಬಂಧಗಳಲ್ಲಿ ಅಲ್ಲಲ್ಲಿ ಹೊಳೆಯುವ ತಿಳಿಹಾಸ್ಯದಲ್ಲಿ ಅರಿವು, ಅನುಕಂಪೆ, ಅಳವು ಎಂಬ ಮೂರು ಗುಣಗಳೂ ಕೂಡಿಕೊಂಡಿವೆ. ಕೆಲವು ಕಡೆ ಶಬ್ದಪ್ರಯೋಗದಲ್ಲಿ ಚಮತ್ಕಾರವೂ ನಡೆದಿದೆ. ಶ್ಲೇಷೆಯೂ ಒಂದೆರಡರೆ ನುಗ್ಗಿ ಬಂದಿದೆ. ಉತ್ತಮವಾದ ಕೆಲವು ಉಪಮಾನಗಳು, ವಿವರಣೆಯಲ್ಲಿ ಇದ್ದಕ್ಕಿದ್ದಂತೆ ತೋರಿಸುವ ವೈಚಿತ್ರ್ಯ, ಆಗಾಗ ತಮ್ಮನ್ನೆ ಹಾಸ್ಯ ಮಾಡಿಕೊಳ್ಳುವ, ನಗುವ ಮನೋವೃತ್ತಿ, ಹಾಸ್ಯದ ಹಿಂದಿನ ಕರುಣೆ – ಇವೆಲ್ಲ ಇಲ್ಲಿಯ ಆಕರ್ಷಣೆಗಳು."

---

ಜಿ. ವೆಂಕಟಸುಬ್ಬಯ್ಯ : ಪ್ರಬಂಧಗಳ ಬಗ್ಗೆ; 'ಎಂವಿಸೀ ಸಮಗ್ರ ಸಾಹಿತ್ಯ' ಸಂಪುಟ ೩, ಪುಟ: xix

ಮುಂದುವರೆಯುವುದು



# ಪದಚರಿತೆ



**ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ**

– ಡಾ. ಪಿ.ವಿ. ನಾರಾಯಣ

**ರೂಪಾಯಿ:** ಇದು ಭಾರತದ ಒಂದು ನಾಣ್ಯ ಎಂಬುದು ಎಲ್ಲರಿಗೂ ಗೊತ್ತು. ಕನ್ನಡದಲ್ಲಿ ಇದನ್ನು ರೂಪಾಯಿ ಎಂದು ಕರೆಯುವಂತೆ, ಇದರ ವ್ಯತ್ಯಸ್ತ ರೂಪಗಳು ಇತರ ಭಾಷೆಗಳಲ್ಲಿ ಬಳಕೆಯಲ್ಲಿವೆ. ಉದಾಹರಣೆಗೆ ಹಿಂದಿಯಲ್ಲಿ ಇದನ್ನು ರೂಪ್ಯಾ, ರುಪಯ್ಯಾ ಎನ್ನುತ್ತಾರೆ. ಕೆಲವರು ಮಾತನಾಡುವಾಗ ರೂಪಾ ಎಂದಷ್ಟೇ ಉಚ್ಚರಿಸುತ್ತಾರೆ. ತಮಿಳು ಮಲಯಾಳಂ ಭಾಷಿಕರಲ್ಲಿ ಪದಮಧ್ಯದ ಪ ವರ್ಣವು ಬ ಎಂದು ಉಚ್ಚಾರವಾಗುವುದರಿಂದ ಇದು ರುಬಾ ಅಥವಾ ರೂಬಾ ಎಂದಾಗುತ್ತದೆ. ಇಂಗ್ಲಿಷಿನಲ್ಲಿ ಇದನ್ನು ರುಪೀ ಎಂದರು.

ಈ ಎಲ್ಲದರ ಮೂಲದಲ್ಲಿರುವುದು ಸಂಸ್ಕೃತದ 'ರೌಪ್ಯ' ಎಂಬ ಶಬ್ದ. ಅದರ ಅರ್ಥ ಬೆಳ್ಳಿ ಎಂದು. ಇದು ರೂಪ್ಯ ಎಂಬ ರೂಪದಲ್ಲಿಯೂ ಸಿಕ್ಕುತ್ತದೆ. ಬೆಳ್ಳಿಬೆಟ್ಟ ಎಂಬರ್ಥದಲ್ಲಿ ಹಿಮಾಲಯವನ್ನು ರೂಪ್ಯಾಚಲ ಎನ್ನುತ್ತಿದ್ದರು. ಹಿಂದಿನ ಕಾಲದಲ್ಲಿ ವಿವಿಧ ಲೋಹಗಳಿಂದ ಮಾಡಿದ ವಿವಿಧಾಕಾರದ ನಾಣ್ಯಗಳೇ ಬಳಕೆಯಲ್ಲಿದ್ದುದು. ಚಿನ್ನ ಬಹು ಬೆಲೆಬಾಳುವ ಲೋಹ, ಅದಾದನಂತರ ಬೆಳ್ಳಿ. ಈಚೆಗಿನ ಪ್ರಮಾಣೀಕೃತ ನಾಣ್ಯ ಎಂದರೆ ರೂಪಾಯಿಯೇ. ಪೈಸೆ ಬರುವ ಮುಂಚೆ ಅದನ್ನು ಹದಿನಾರು ಭಾಗ ಮಾಡಿ ಒಂದೊಂದಕ್ಕೂ ಆಣೆ ಎನ್ನುತ್ತಿದ್ದರು; ಒಂದು ಆಣೆಗೆ ಹನ್ನೆರಡು ಕಾಸುಗಳು; ಹೀಗಾಗಿ ಒಂದು ರೂಪಾಯಿಗೆ ತೊಂಬತ್ತಾರು ಕಾಸುಗಳಾಗಿದ್ದವು. ಇವುಗಳಿಗೆ ಬೇರೆ ಬೇರೆಯೇ ಆಕಾರದ ಲೋಹಗಳ ನಾಣ್ಯಗಳಿದ್ದುವು. ಜೊತೆಗೆ ನಾಲ್ಕು ಆಣೆಗಳ ಪಾವಲಿ ಮತ್ತು ಎರಡು ಪಾವಲಿ ಬೆಲೆಯ ಎಂಟಾಣೆ ನಾಣ್ಯಗಳೂ ಇದ್ದವು. ಒಂದೆರಡು ದಶಕಗಳಿಂದ ಈಗಿನ ದಶಾಂಶ ಪದ್ಧತಿ ಜಾರಿಗೆ ಬಂದಿದೆ; ಒಂದು ರೂಪಾಯಿಗೆ ನೂರು ಪೈಸೆಗಳು. ಬಂದ ಹೊಸತರಲ್ಲಿ ಇದನ್ನು ನಯಾಪೈಸಾ ಎಂದೇ ಕರೆಯುತ್ತಿದ್ದರು.

ಬ್ರಿಟಿಷರು ನಮ್ಮನ್ನು ಆಳುತ್ತಿದ್ದಾಗ, ಕಳೆದ ಶತಮಾನದ ಮೊದಲಲ್ಲಿ ಅವರ ರಾಣಿ ವಿಕ್ಟೋರಿಯ. ಆಗ ಅವಳ ಚಿತ್ರವಿದ್ದ ಬೆಳ್ಳಿಯ ರೂಪಾಯಿಗಳು ಚಲಾವಣೆಯಲ್ಲಿದ್ದುವಂತೆ; ಒಂದು ತೊಲ ತೂಕದ ಅಪ್ಪಟ ಬೆಳ್ಳಿಯ ನಾಣ್ಯ ಅದು. ಬರಬರುತ್ತ ರೂಪಾಯಿಯ ಕೊಳ್ಳುವ ಸಾಮರ್ಥ್ಯ ಕಡಿಮೆಯಾಗುತ್ತ ಅದರ ಲೋಹ, ತೂಕ, ಆಕಾರಗಳು ಬದಲಾಗುತ್ತ ಬಂದವು; ಜೊತೆಗೆ ಕಾಗದದ ನೋಟು ಕೂಡ ಬಂತು. ಕನ್ನಡದಲ್ಲಿ ರೂಪಾಯಿಯನ್ನು ಸೂಚಿಸಲು ರೂ ಎಂದು ಬರೆಯುವ ವಾಡಿಕೆಯಿದೆ; ಇಂಗ್ಲಿಷ್‌ನಲ್ಲಿ ಒಂದನ್ನು ಸೂಚಿಸುವಾಗ ಖಿ. ಎಂದೂ ಹೆಚ್ಚಿನದನ್ನು ಸೂಚಿಸುವಾಗ ಖ. ಎಂದೂ ಈಚಿನವರೆಗೆ ಬರೆ–ಯುತ್ತಿದ್ದರು. ಈಚೆಗೆ ಭಾಷೆ ಯಾವುದೇ ಇರಲಿ ರೂಪಾಯಿಯನ್ನು ಸೂಚಿಸುವ ' ಏಕರೂಪದ ಸಂಕೇತವೊಂದನ್ನು ಭಾರತ ಅಂಗೀಕರಿಸಿ ಎಲ್ಲೆಡೆ ಬಳಕೆಯಲ್ಲಿದೆ.

=====

**ವಚನ:** ಇದೊಂದು ಸಂಸ್ಕೃತ ಶಬ್ದ, ಇದರ ಅರ್ಥ ಮಾತು ಎಂದು. ವಚ ಎಂದರೆ ಮಾತನಾಡುವ ಪಕ್ಷಿ, ಗಿಣಿ ಎಂಬರ್ಥವಿದೆ. ವಚಕ್ನಿ ಎಂಬುದು ಚೆನ್ನಾಗಿ ಮಾತನಾಡಬಲ್ಲವನನ್ನು ಸೂಚಿಸುತ್ತದೆ. ನುಡಿನಿಪುಣತೆಯನ್ನು ನಾಗಚಂದ್ರ ತನ್ನ 'ಮಲ್ಲಿನಾಥ ಪುರಾಣ'ದಲ್ಲಿ ವಚನಪ್ರೌಢಿ ಎನ್ನುತ್ತಾನೆ. ವ್ಯಾಕರಣದಲ್ಲಿ ಇದು ಸಂಖ್ಯೆಯನ್ನು ಸೂಚಿಸುವ ಪಾರಿಭಾಷಿಕ ಶಬ್ದವಾಗಿದೆ: ಏಕವಚನ, ದ್ವಿವಚನ, ಬಹುವಚನ.

ಕನ್ನಡ ಚಂಪೂ ಕಾವ್ಯಗಳಲ್ಲಿ ಪದ್ಯಗಳ ನಡುವೆ ಬರುವ ಗದ್ಯವನ್ನು ವಚನ ಎಂದು ಕರೆಯುತ್ತಿದ್ದರು. ಹನ್ನೆರಡನೆಯ ಶತಮಾನದಲ್ಲಿ ಬಂದ ಬಸವಾದಿ ಶಿವಶರಣರು ರಚಿಸಿದ ಕೃತಿಗಳನ್ನು ವಚನ ಎಂಬ ಮಾತಿನಿಂದ ಸೂಚಿಸುವ ಪರಿಪಾಟ ವಚನಕಾರರಲ್ಲಿಯೇ ಕಾಣಬರುತ್ತದೆ. ನಮಗೆ ತಿಳಿದ ಮೊದಲ ವಚನಕಾರ ಜೇಡರ ದಾಸಿಮಯ್ಯನು 'ಆದ್ಯರ ವಚನ'ವನ್ನು ಉಲ್ಲೇಖಿಸುತ್ತಾನೆ. ಪ್ರಾಯಶಃ ಇದು ಹಿರಿಯ ಭಕ್ತರು ಆಡಿದ ಮಾತು ಎಂಬರ್ಥವನ್ನು ಹೊಂದಿದೆ. "ಎರಡೆಂಬತ್ತು ಕೋಟಿ ವಚನಗಳ ಹಾಡಿ ಹಾಡಿ ಹಲವ ಹಂಬಲಿಸಿತ್ತೆನ್ನ ಮನವು" ಎಂಬುದು ಅಲ್ಲಮನ ಮಾತು.. "ಆನು ಒಲಿದಂತೆ ಹಾಡುವೆ" ಎಂಬ ಬಸವಣ್ಣನ ಮಾತಿನಲ್ಲಿ ಈ ಹಾಡುವಿಕೆ ನಿರ್ದಿಷ್ಟತೆಯಿಂದ ಕೂಡಿರದೆ ಭಾವಸಂವಾದಿಯಾದುದು ಎಂಬ ಅರ್ಥವು ಸೂಚಿತವಾಗಿದೆ. ಸಿದ್ಧರಾಮನು "ವಚನಾನುಭವ ವಾಗ್ರಚನೆಯಲ್ಲ" ಎನ್ನುತ್ತಾನೆ. ವಚನಗಳು ಅನುಭ[ಭಾ]ವದ ಅಭಿವ್ಯಕ್ತಿಯೇ ಹೊರತು, ಕೇವಲ ಮಾತಿನ ಜೋಡಣೆಯಲ್ಲ ಎಂಬ ಅರ್ಥ ಇಲ್ಲಿದ್ದಂತಿದೆ.

ವಚನ ಕೊಡು ಎಂಬುದು ಮಾತು ಕೊಡು ಎಂಬ ಅರ್ಥದಲ್ಲಿಯೂ ಬಳಕೆಯಲ್ಲಿದೆ. ಮಾತಿಗೆ ತಪ್ಪಿದವನನ್ನು 'ವಚನಭ್ರಷ್ಟ' ಎಂದೇ ಕರೆಯುತ್ತಾರೆ. ಮಾತಿನ ಮಲ್ಲ ಎಂಬರ್ಥದಲ್ಲಿ ಕುಮಾರವ್ಯಾಸನು 'ವಚನಶೂರ' ಎಂಬ ಶಬ್ದವನ್ನು ಬಳಸುತ್ತಾನೆ ("ವಚನಶೂರರು ನಾವು ಪಾರ್ಥಿವ ನಿಚಯವೇ ಭುಜಶೂರರು"). ಮಾತು ಕೊಡು ಎಂಬರ್ಥದಲ್ಲಿ 'ವಚನಿಸು' ಎಂಬ ಪ್ರಯೋಗವೂ ಕುಮಾರವ್ಯಾಸನಲ್ಲಿಯೇ ಇದೆ ("ವಚನಿಸಿ ಮಾಡದಿಹ ಬಾಹಿರರು ನಾವಲ್ಲ").

## ಪ್ರಕಟಣೆ

### ೨೦೨೧ ನೇ ಸಾಲಿನ ಸಾರಂಗಿ ವೆಂಕಟರಾಮಯ್ಯ–ಪುಟ್ಟಚ್ಚಮ್ಮ ಸ್ಮಾರಕ ದತ್ತಿ ಪ್ರಶಸ್ತಿ

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಶ್ರೀ ಎಸ್.ವಿ.ಶ್ರೀನಿವಾಸರಾವ್ ಅವರು ಸ್ಥಾಪಿಸಿರುವ ದಿವಂಗತ ಸಾರಂಗಿ ವೆಂಕಟರಾಮಯ್ಯ–ಪುಟ್ಟಚ್ಚಮ್ಮ ದತ್ತಿ ನಿಧಿಯ ಅಡಿಯಲ್ಲಿ ೨೦೨೧ನೇ ಸಾಲಿನ ಪ್ರಶಸ್ತಿಗೆ ೨೦೨೧ರ ಜನವರಿಯಿಂದ ಡಿಸೆಂಬರ್ ನಡುವೆ ಪ್ರಥಮ ಮುದ್ರಣವಾಗಿ ಪ್ರಕಟಗೊಂಡಿರುವ ನಾಟಕ ಕೃತಿಗಳನ್ನು ಆಹ್ವಾನಿಸಲಾಗಿದೆ. ನಾಟಕದ ೩ ಪ್ರತಿಗಳನ್ನು ಪ್ರತಿಷ್ಠಾನದ ಕಚೇರಿಗೆ ೨೦೨೨ ಆಗಸ್ಟ್ ೧೬ರ ಒಳಗೆ ತಲುಪಿಸಲು ಸೂಚಿಸಲಾಗಿದೆ.

ಪ್ರಶಸ್ತಿಯ ಮೊತ್ತ ರೂ.೩,೦೦೦/– ಹಾಗೂ ಪ್ರಶಸ್ತಿಪತ್ರವನ್ನು ವಿಶೇಷ ಸಮಾರಂಭದಲ್ಲಿ ವಿತರಿಸಲಾಗುವುದು. ಈ ಸ್ಪರ್ಧೆಯು ಉದಯೋನ್ಮುಖ ಸಾಹಿತಿಗಳಿಗೆ ಮಾತ್ರ ಸೀಮಿತವಾಗಿದೆ. ಅವರು ಗರಿಷ್ಠ ೨ ಕೃತಿಗಳನ್ನು ಮಾತ್ರ ಪ್ರಕಟಿಸಿರಬೇಕು. ಪ್ರಥಮ ಕೃತಿಗೆ ಆದ್ಯತೆ ನೀಡಲಾಗುವುದು.

**ಸಂಪರ್ಕಕ್ಕೆ : ೯೪೮೨೮೧೨೧೩೪**




# ಪತ್ರಿಕಾ ನೆನಪು




ಡಾ.ಗೋವಿಂದ ಜಾಲಿಹಾಳ ದತ್ತಿ ಕಾರ್ಯಕ್ರಮ, ಭಕ್ತಿಗೀತೆ ಗಾಯನ ಸ್ಪರ್ಧೆ, ಬಹುಮಾನ ವಿತರಣೆ ಹಾಗೂ 2021-22ನೇ ಸಾಲಿನ ಹಳಗನ್ನಡ ಕಲಿಕಾರ್ಥಿಗಳಿಗೆ ಪ್ರಮಾಣಪತ್ರ ಪ್ರದಾನ: ಉದ್ಘಾಟನೆ: ಬೈರಮಂಗಲ ರಾಮೇಗೌಡ, ಉಪಸ್ಥಿತಿ: ಪ್ರೊ.ಎಂ.ಎಚ್. ಕೃಷ್ಣಯ್ಯ, ಶಾಂತಾರಾಜು, ಎಸ್.ಅನಿಲ್‌ಕುಮಾರ್, ಆಯೋಜನೆ: ಬಿ.ಎಂ.ಶ್ರೀ. ಪ್ರತಿಷ್ಠಾನ, ಸ್ಥಳ: ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ ಕಲಾಭವನ, ಬೆಳಿಗ್ಗೆ 10.30

# ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೧೫-೭-೨೦೨೨

## ಪ್ರೊ. ತೀ.ನಂ.ಶ್ರೀ, ಪ್ರೊ.ಡಿ.ಲಿಂಗಯ್ಯ, ಸಮೇತನಹಳ್ಳಿ ರಾಮರಾವ್, ಪ್ರೊ. ಟಿ.ಎಸ್. ವೆಂಕಣ್ಣಯ್ಯ ಮತ್ತು ಶ್ರೀಮತಿ ಶಾರದಮ್ಮ ಹನುಮಯ್ಯ ದತ್ತಿ ಉಪನ್ಯಾಸ

### ವಿಷಯ : ಪ್ರೊ.ಡಿ. ಲಿಂಗಯ್ಯನವರ ಬದುಕು-ಸಾಧನೆ




ಉಪನ್ಯಾಸಕರು : ಡಾ.ಟಿ.ಕೆ.ಕೆಂಪೇಗೌಡ

ಅಧ್ಯಕ್ಷತೆ : ಡಾ. ಬೈರಮಂಗಲ ರಾಮೇಗೌಡ

ಕಾರಣಾಂತರಗಳಿಂದ ವರ್ಷ ವರ್ಷವೂ ಸ್ವತಂತ್ರವಾಗಿ ದತ್ತಿ ಕಾರ್ಯಕ್ರಮಗಳನ್ನು ನಡೆಸಲಾಗದ ದತ್ತಿನಿಧಿಗಳನ್ನು ಒಟ್ಟು ಸೇರಿಸಿ ೧೫-೦೭-೨೦೨೨ರಂದು ಆಯೋಜಿಸಲಾಗಿದ್ದ ಸಂಕೀರ್ಣ ದತ್ತಿ ಕಾರ್ಯಕ್ರಮದಲ್ಲಿ ಸರದಿಯಂತೆ ಈ ವರ್ಷ ಪ್ರೊ. ಡಿ.ಲಿಂಗಯ್ಯ ಬದುಕು-ಸಾಧನೆ ಕುರಿತು ಉಪನ್ಯಾಸ ಏರ್ಪಡಿಸಲಾಗಿತ್ತು. ಪ್ರೊ. ಟಿ.ಎಸ್. ವೆಂಕಣ್ಣಯ್ಯ ದತ್ತಿ ೧೯೭೬ರಿಂದಲೂ ನಡೆದುಕೊಂಡು ಬರುತ್ತಿದೆ. (ಪ್ರತಿಷ್ಠಾನದ ಪ್ರಾರಂಭಕ್ಕೂ ಮುನ್ನ ಪ್ರೊ.ಎಂ.ವಿ.ಸೀಯವರೇ ಟಿ.ಎಸ್. ವೆಂಕಣ್ಣಯ್ಯನವರ ಜನ್ಮ ಶತಮಾನವನ್ನು ಅವರ ಅಭಿಮಾನಿಗಳು ಮತ್ತು ವಿದ್ಯಾರ್ಥಿಗಳ ಸಹಾಯದಿಂದ ನಡೆಸಿಕೊಂಡು ಬಂದಿದ್ದಾರೆ) ಹಸ್ತಪ್ರತಿ ಸಂಯೋಜಕರಾದ ಶ್ರೀ ಬಿ.ಎಸ್. ಗುರುಪ್ರಸಾದ್ ಈ ದಿನದ ಕಾರ್ಯಕ್ರಮದಲ್ಲಿ ಇನ್ನಿತರ ಮೂರು ದತ್ತಿನಿಧಿಗಳ ಸ್ಥಾಪಕರನ್ನು ಪರಿಚಯಿಸಿ, ಸಭಾಧ್ಯಕ್ಷರನ್ನು ಮತ್ತು ಉಪನ್ಯಾಸಕರನ್ನು ಸ್ವಾಗತಿಸಿ ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಉಪನ್ಯಾಸ ನೀಡಲು ಬಂದಿದ್ದ ಡಾ. ಟಿ.ಕೆ. ಕೆಂಪೇಗೌಡ ಅವರನ್ನು ಸಭೆಗೆ ಡಾ. ಬೈರಮಂಗಲ ರಾಮೇಗೌಡ ಪರಿಚಯಿಸಿದರು. ಕೆಂಪೇಗೌಡರು ಶ್ರೀ ಲಿಂಗಯ್ಯನವರನ್ನು ಹಲವು ವರ್ಷಗಳ ಕಾಲದಿಂದ ಬಲ್ಲವರು ಮತ್ತು ಅವರ ವಿದ್ಯಾರ್ಥಿಯೂ ಆಗಿದ್ದರು. ಪ್ರತಿಷ್ಠಾನದ ಮೇಲಿನ ಗೌರವದಿಂದಲೂ ಹಾಗೂ ಶ್ರೀ ಲಿಂಗಯ್ಯನವರಿಗೆ ಗೌರವ ಸೂಚಿಸುವ ಉದ್ದೇಶದಿಂದಲೂ ಉಪನ್ಯಾಸಕರು ಮೈಸೂರಿನಿಂದ ಆಗಮಿಸಿರುವುದಾಗಿ ತಿಳಿಸಿದರು. ಪ್ರೊ. ಲಿಂಗಯ್ಯನವರ ಜನನ, ಬಾಲ್ಯ, ವಿದ್ಯಾಭ್ಯಾಸ, ವೃತ್ತಿಜೀವನ, ನಿವೃತ್ತಿ ನಂತರದ ಅವರ ಚಟುವಟಿಕೆಗಳು, ಶಿಸ್ತು, ಪ್ರಾಮಾಣಿಕತೆ, ಅವರೊಂದಿಗೆ ತಮ್ಮ ಒಡನಾಟ, ಮುಂತಾದವುಗಳನ್ನು ಸ್ವಾರಸ್ಯಕರ ನಿದರ್ಶನಗಳೊಂದಿಗೆ ವಿವರಿಸಿದರು. ಕನ್ನಡವೇ ಉಸಿರಾಗಿ ಬದುಕಿದ ಪ್ರೊ. ಲಿಂಗಯ್ಯನವರು, ಒಬ್ಬ ಶ್ರೇಷ್ಠ ಜಾನಪದ ತಜ್ಞರೆಂದು ಕರ್ನಾಟಕ ವಿದ್ವತ್ ವಲಯದಲ್ಲಿ ಗುರುತಿಸಲ್ಪಟ್ಟಿದ್ದರು. ಜಾನಪದ ಕಲಾವಿದರನ್ನು ಪ್ರೋತ್ಸಾಹಿಸಿದರು. ವಿದ್ಯಾರ್ಥಿದೆಸೆಯಿಂದಲೂ ಜಾನಪದದ ಬಗೆಗೆ ವಿಶೇಷ ಕಾಳಜಿ ವಹಿಸಿ ಹಳ್ಳಿಹಳ್ಳಿಗಳನ್ನು ಸುತ್ತಾಡಿ, ಜನಪದ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳನ್ನು ಏಕಾಂಗಿಯಾಗಿ ಸಂಗ್ರಹಿಸಿ ಪ್ರಕಟಿಸಿದರು. ಜಾನಪದ ವಿಶ್ವಕೋಶ ಹಾಗೂ ಜಾನಪದ ವೈದ್ಯಕೋಶ ರಚನೆಯಲ್ಲೂ ಮಹತ್ವದ ಪಾತ್ರವಹಿಸಿದ್ದರು. ೧೯೬೭ ರಿಂದಲೂ ಜಾನಪದ ಗ್ರಂಥಗಳನ್ನು ಪ್ರಕಟಿಸಲಾರಂಭಿಸಿದರು. ಅವರ 'ಸೋಬಾನೆ ಕೃಷ್ಣೇಗೌಡ' ೨೦೧೦ರಲ್ಲಿ ಪ್ರಕಟಗೊಂಡಿತು. ಒಟ್ಟು ೨೨ ಜಾನಪದ ಕೃತಿಗಳನ್ನು ಹೊರತಂದಿರುವ ಕೀರ್ತಿ ಇವರದ್ದಾಗಿದೆ. ಸಾಹಿತ್ಯದ ವಿವಿಧ ಪ್ರಕಾರಗಳಲ್ಲೂ ಕೃಷಿ ಮಾಡಿರುವ ಪ್ರೊ.ಲಿಂಗಯ್ಯನವರು ೧೪ ನಾಟಕಗಳು, ೩ ಕಥಾ ಸಂಗ್ರಹಗಳು, ೪ ವಿಮರ್ಶಾ ಗ್ರಂಥಗಳು, ೧೨ ಕವನ ಸಂಗ್ರಹಗಳು, ೫ ವ್ಯಕ್ತಿ ಚಿತ್ರಗಳು, ಜೀವನ ಚರಿತ್ರೆ. ೪ ಪ್ರಬಂಧ ಸಂಕಲನ, ೩ ಚರಿತ್ರೆಗಳು, ೨ ಕಾದಂಬರಿಗಳು, ೨೦ ಸಂಪಾದಿತ ಕೃತಿಗಳನ್ನು ಹೊರತಂದಿದ್ದಾರೆ. ಕೆಂಪೇಗೌಡರು ವಿಶೇಷವಾಗಿ ಜಾನಪದ ಕೃತಿಯಾದ ಪಿರಿಯಾಪಟ್ಟಣದ ಜಗಳ, ಕಾದಂಬರಿ ಅಸಹಾಯಕರು, ಶಿವಪುರ ಧ್ವಜಸತ್ಯಾಗ್ರಹ (೩ ಮುದ್ರಣ ಕಂಡಿದೆ), ಸತ್ಯಾಗ್ರಹಿಗಳ ಸಂದರ್ಶನ, ನಾಟಕ ದಡ್ಡಶಿಖಾಮಣಿ, ಕವನ ಸಂಗ್ರಹ ವಚನ ದವನ, ಕಥಾಸಂಗಮ, ರಣಕಾಟಿಗಳು ಇತ್ಯಾದಿ ಕೃತಿಗಳನ್ನು ಪರಿಚಯಿಸಿದರು.

ಡಾ. ಶಾಂತರಾಜು ಅವರು ಉಪನ್ಯಾಸಕರಿಗೆ ಮತ್ತು ಕಾರ್ಯಕ್ರಮದ ಯಶಸ್ಸಿಗೆ ಕಾರಣಕರ್ತರಾದ ಎಲ್ಲರಿಗೂ ವಂದಿಸಿದರು.

## ಶ್ರೀ ಸೀತಾರಾಮರಾಯರು ಹಾಗೂ ಶ್ರೀಮತಿ ರುಕ್ಮಿಣಮ್ಮನವರ ಕಿರುಪರಿಚಯ

ಶ್ರೀ ಸೀತಾರಾಮರಾಯರು ಶ್ರೀಯುತ ಕೆ.ಜಿ.ಶಾಮರಾಯರು ಮತ್ತು ಶ್ರೀಮತಿ ಭಾಗಮ್ಮನವರ ಎರಡನೇ ಪುತ್ರರಾಗಿ ೧೯೦೪ ರಲ್ಲಿ ಜನಿಸಿದರು. ಶ್ರೀ ಸೀತಾರಾಮರಾಯರಿಗೆ ಒಬ್ಬರು ಅಣ್ಣ ಹಾಗೂ ಇಬ್ಬರು ತಂಗಿಯರಿದ್ದರು. ಶ್ರೀ ಸೀತಾರಾಮರಾಯರು ಆಗಿನ ಕಾಲದ Etrance (ಇಂಟರ್ ಮೀಡಿಯಟ್)ವರೆಗೂ ಓದಿದ್ದರು. ಅವರಿಗೆ ಸಂಸ್ಕೃತವಲ್ಲದೇ ಹಲವಾರು ಭಾರತೀಯ ಭಾಷೆಗಳು ಮಾತನಾಡಲು ಬರುತ್ತಿದ್ದವು. ಅವರು Book Binding ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಶ್ರೀ ಸೀತಾರಾಮರಾಯರು ೧೯೯೫ನೇ ಇಸವಿಯಲ್ಲಿ ತಮ್ಮ ೯೧ನೇ ವಯಸ್ಸಿನಲ್ಲಿ ನಿಧನರಾದರು.

## ದತ್ತಿ ದಾನಿ ಶ್ರೀ ಬಿ.ಎಸ್.ಗೋಪಾಲಕೃಷ್ಣ ಅವರ ಕಿರುಪರಿಚಯ

ಶ್ರೀಯುತ ಗೋಪಾಲಕೃಷ್ಣ ಅವರು ಶ್ರೀ ಸೀತಾರಾಮರಾವ್ ಮತ್ತು ಶ್ರೀಮತಿ ರುಕ್ಮಿಣಮ್ಮನವರ ಐದನೇ ಪುತ್ರರಾಗಿ ೧೭ನೇ ಮಾರ್ಚ್ ೧೯೪೧ರಲ್ಲಿ ಜನಿಸಿದರು. ಶ್ರೀ ಗೋಪಾಲಕೃಷ್ಣ ಅವರಿಗೆ ನಾಲ್ಕು ಜನ ಹಿರಿಯ ಸಹೋದರರು ಹಾಗೂ ಇಬ್ಬರು ತಂಗಿಯರು. ಅವರು ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿ ಓದಿ, ೧೯೬೦ರಲ್ಲಿ ಬಿಎಸ್.ಸಿ. ಮುಗಿಸಿ, ೧೯೬೧ರ ಮೇ ೩೧ರಂದು ಜೀವವಿಮಾ ನಿಗಮದಲ್ಲಿ ಕೆಲಸಕ್ಕೆ ಸೇರಿದರು. ಕೆಲಸದಲ್ಲಿದ್ದಾಗಲೇ ೧೯೬೮ರಲ್ಲಿ ಬಿ.ಎಂ.ಎಸ್. ಕಾಲೇಜಿನಿಂದ ಬಿ.ಎಲ್. ಪದವಿ ಪಡೆದರು. ಸುಮಾರು ೪೦ ವರ್ಷಗಳ ಸೇವೆಯ ನಂತರ ಅವರು ೨೦೦೧ರ ಏಪ್ರಿಲ್ ಒಂದರಿಂದು ನಿವೃತ್ತಿ ಹೊಂದಿದರು.

## ಬಿ.ಎಂ.ಶ್ರೀ. ಪ್ರತಿಷ್ಠಾನದ ಬದಲಾದ ದೂರವಾಣಿ ಸಂಖ್ಯೆ

ಬಿ.ಎಂ.ಶ್ರೀ.ಪ್ರತಿಷ್ಠಾನದ ಸ್ಥಿರ ದೂರವಾಣಿ ಸಂಖ್ಯೆ ರದ್ದುಗೊಂಡಿದ್ದು ಸಂಚಾರಿ ದೂರವಾಣಿ ಸಂಖ್ಯೆ – ೯೭೨೮೧೨೧೨೭ ಈ ಮೂಲಕವೇ ಸಂಪರ್ಕಿಸಬೇಕಾಗಿ ಕೋರುತ್ತೇವೆ.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2021-2023**
**dt. 28-12-2020**
**Office of Posting: Bangalore PSO, Bangalore 560026**
**Price : Annual Subscription Rs. 20/-**
**Date of publishing and Posting : 30-07-2022**

## ಬಿ.ಎಂ.ಶ್ರೀ. ಪ್ರತಿಷ್ಠಾನದ ಪ್ರಕಟಣೆಗಳು ಹಾಗೂ ಮಾರಾಟಕ್ಕೆ ಲಭ್ಯವಿರುವ ಪುಸ್ತಕಗಳ ಪಟ್ಟಿ

೧. ಶ್ರೀ ಕೌಸ್ತುಭ
೨ ಅರ್ಚನಾ
೩. ಯುದ್ಧಕಾಂಡ
೪ ಲೋಚನ ದೀಪ್ತಿ
೫. ಬಿ.ಎಂ.ಶ್ರೀ. ಅವರ ಆಯ್ದ ಕವನಗಳು
೬. ಬಿ.ಎಂ.ಶ್ರೀಕಂಠಯ್ಯ ಜೀವನ ಸಾಧನೆ
೭. ಇಂಗ್ಲಿಷ್ ಗೀತಗಳು
೮. ಪ್ರೊ. ವಿ.ಎಂ. ಇನಾಂದಾರ್ : ಬದುಕು ಬರಹ
೯.. ಗ್ರಂಥ ಸಂಪಾದನೆ ಪರಿಭಾಷಾ ಕೋಶ
೧೦. ಹಸ್ತಪ್ರತಿ ಅಧ್ಯಯನ ಶಾಸ್ತ್ರ
೧೧. ಹೊಸಗನ್ನಡ ವ್ಯಾಕರಣ
೧೨. ಕರ್ನಾಟಕ ಶಬ್ದಾನುಶಾಸನಂ
೧೩. ಕಾವ್ಯದ ಒಂದು ಚುಂಗನ್ನು ಹಿಡಿದು
೧೪. ಕಾವ್ಯ ಶಾಸ್ತ್ರ ವಿನೋದ
೧೫. ಕನ್ನಡ ಶರಣ ಎಂ.ಆರ್.ಶ್ರೀ.
೧೬. ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ
೧೭. ಕವಿಗಳು ಕಂಡ ಬಿ.ಎಂ.ಶ್ರೀ.
೧೮. ಲೋಚನ ಲೇಖನ ಸೂಚಿ
೧೯. ಪ್ರೊ. ಡಿ.ಲಿಂಗಯ್ಯ – ಜೀವನ ಮತ್ತು ಸಾಹಿತ್ಯ ಸಾಧನೆ
೨೦. ಎಂ.ವಿ.ಸೀತಾರಾಮಯ್ಯ–ಜೀವನ ಮತ್ತು ಸಾಹಿತ್ಯ ಸಾಧನೆ

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ..........................................................................................

..........................................................................................................

..........................................................................................................

ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೯೭೨೮೧೨೧೨೭